ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಶುಕ್ರವಾರ, ದಿನಾಂಕ 19ನೇ ಜುಲೈ, 2019

ಗೃಹ ಇಲಾಖೆಯಲ್ಲಿ ಅನರ್ಹರ ನೇಮಕಾತಿ ಕುರಿತು

ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು):-

399 (215) ಮಾನ್ಯ ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ನ್ಯಾಯ ವಿಜ್ಞಾನ ಪ್ರಯೋಗಾಲಯದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ನಿರ್ದೇಶಕರಿಗೆ ಇರಬೇಕಾದ ವಿದ್ಯಾರ್ಹತೆ ಏನು ; ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ನಿರ್ದೇಶಕರು ಹೊಂದಿರುವ ವಿದ್ಯಾರ್ಹತೆ ಏನು ;

(ಆ) ನ್ಯಾಯ ವಿಜ್ಞಾನ ಪ್ರಯೋಗಾಲಯದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸೈಬರ್ ವಿಭಾಗದ ವರದಿ ನೀಡುವ ದಾಖಲೆಗಳಿಗೆ ಸಹಿ ಮಾಡಲು ಅರ್ಹರಿರುವ ಅಧಿಕಾರಿಗಳು ಯಾವ ಪದವಿಯನ್ನು ಹೊಂದಿರುತ್ತಾರೆ ;

(ಇ) ಅರ್ಹ ವಿದ್ಯಾಭ್ಯಾಸ ಪಡೆಯದೆ ಕೇವಲ 3 ತಿಂಗಳ ತರಬೇತಿ ಪಡೆದಿರುವ ಯಾವುದೇ ವ್ಯಕ್ತಿಯು ಸೈಬರ್ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸಲು ಅರ್ಹರೆ ; ಹಾಗಿದ್ದಲ್ಲಿ, ನೇಮಕ ಪ್ರಕ್ರಿಯೆ ಸಂದರ್ಭದಲ್ಲಿ ಅರ್ಹ ವಿದ್ಯಾಭ್ಯಾಸದ ಕುರಿತು ಮಾಹಿತಿ ಪಡೆಯುವ ಅವಶ್ಯಕತೆ ಇದೆಯೇ ; ಯಾವುದೇ ಅರ್ಹತೆ ಇಲ್ಲದ ವ್ಯಕ್ತಿಯನ್ನು ನೇಮಕ ಮಾಡಿ ಆ ಬಳಿಕ 3 ತಿಂಗಳ ತರಬೇತಿ ನೀಡಿದ್ದಲ್ಲಿ, ಎಮ್,ಎಸ್ಸಿ, ಕಂಪ್ಯೂಟರ್ ಸೈನ್ಸ್ ಪದವಿಗೆ ಸರಿಸಮ ಎಂದಂತಾಗಲಿಲ್ಲವೇ ; ಈ ಕುರಿತು ಸರ್ಕಾರದ ನಿಲುವೇನು ;

(ಈ) ಸಿಬ್ಬಂದಿಗಳ ಕೊರತೆಯ ನೆಪವೊಡ್ಡಿ ಅನರ್ಹರನ್ನು ಸೈಬರ್ ವಿಭಾಗಕ್ಕೆ ನೇಮಕ ಮಾಡಿ 3 ತಿಂಗಳ ತರಬೇತಿ ನೀಡಲಾಗಿದೆ ಎಂದರೆ ಸೈಬರ್ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವವರು ನೇಮಕಾತಿ ಸಂದರ್ಭದಲ್ಲಿ ಅರ್ಹ ವಿದ್ಯಾಭ್ಯಾಸ ಹೊಂದಿಲ್ಲ ಎಂಬುದನ್ನು ಒಪ್ಪಿಕೊಂಡಂತಾಗಿದ್ದು ಈ ರೀತಿಯಾಗಿ ಅನರ್ಹರನ್ನು ನೇಮಕ ಮಾಡಿದವರ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ?